

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 19-03-2021 ಪ್ರಶ್ನೆ ಸಂಖ್ಯೆ : 1465 (1706)

0ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾ.ದ ದಿನಾಂಕ : 19-03-2021

ಉತ್ತರಿಸುವ ಸಚಿವರು: ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಗ್ರಾಮ ಪಂಚಾಯತಿ ಸಿಬ್ಬಂದಿಗಳಿಗೆ ಕನಿಷ್ಠ ವೇತನ ಮತ್ತು ಪಿ.ಎಫ್. ಇ.ಎಸ್.ಐ. ಸೌಲಭ್ಯ ಒದಗಿಸುವ ಕುರಿತು.

(ಅ) ರಾಜ್ಯದಲ್ಲಿರುವ ತಾಲ್ಲೂಕು ಪಂಚಾಯತಿಗಳ ಸಂಖ್ಯೆ ಎಷ್ಟು; ಅವುಗಳ ವ್ಯಾಪ್ತಿಯಲ್ಲಿನ ಗ್ರಾಮ ಪಂಚಾಯತಿಗಳ ಸಂಖ್ಯೆ ಎಷ್ಟು; ಈ ಗ್ರಾಮ ಪಂಚಾಯತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅನುಮೋದನೆಯಾದ ಮತ್ತು ಅನುಮೋದನೆಯಾಗದ ಸಿಬ್ಬಂದಿಗಳ ಸಂಖ್ಯೆ ಎಷ್ಟು ; (ತಾಲ್ಲೂಕು ಪಂಚಾಯತಿವಾರು ಮಾಹಿತಿ ನೀಡುವುದು)

(ಆ) ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನವನ್ನು ಸರಕಾರದಿಂದಲೇ ಪಾವತಿಸುವ ಆದೇಶವಾಗಿರುವುದು ನಿಜವೇ; (ಆದೇಶದ ಪ್ರತಿಯನ್ನು ಒದಗಿಸುವುದು) ಸಿಬ್ಬಂದಿ ವೇತನ ಪಾವತಿಗೆ ಅಗತ್ಯವಾದ ಅನುದಾನವೆಷ್ಟು; ಕಳೆದ ಎರಡು ವರ್ಷಗಳಲ್ಲಿ ಸರಕಾರದಿಂದ ಸಿಬ್ಬಂದಿಗಳಿಗೆ ಪಾವತಿಸದ ವೇತನದ ಅನುದಾನವೆಷ್ಟು ; (ವರ್ಷವಾರು, ಜಿಲ್ಲಾವಾರು ವಿವರ ನೀಡುವುದು)

(ಇ) ಗ್ರಾಮ ಪಂಚಾಯತಿಗಳ ಸಿಬ್ಬಂದಿಗಳು ಕಾರ್ಮಿಕ ಕಾಯಿದೆಯ ವ್ಯಾಪ್ತಿಗೆ ಒಳಪಡುತ್ತಾರೆಯೇ; ಈ ಸಿಬ್ಬಂದಿಗಳಿಗೆ ಇರುವ ಕನಿಷ್ಠ ವೇತನವೆಷ್ಟು; ಈ ಸಿಬ್ಬಂದಿಗಳಿಗೆ ಇ.ಎಸ್.ಐ ಮತ್ತು ಪಿ.ಎಫ್. ಸೌಲಭ್ಯವನ್ನು ನೀಡಲಾಗುತ್ತಿದೆಯೇ; ಇಲ್ಲವಾದಲ್ಲಿ, ಇದಕ್ಕೆ ಕಾರಣವೇನು; ತಾಲ್ಲೂಕು ಪಂಚಾಯತಿ ಅಥವಾ ಹುದ್ದೆಯ ಅನುಮೋದನೆಯನ್ನು ನೀಡುವ ಜಿಲ್ಲಾ ಪಂಚಾಯತಿಯನ್ನು ಒಂದು ಘಟಕವಾಗಿ ಪರಿಗಣಿಸಿ ಈ ಸೌಲಭ್ಯವನ್ನು ಸಿಬ್ಬಂದಿಗಳಿಗೆ ನೀಡುವ ಬಗ್ಗೆ ಸರಕಾರದ ಕ್ರಮವೇನು ?